ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 8-15
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪಶ್ಚಿಮ ಕರಾವಳಿಯ ಪಂಚಲಿಂಗೇಶ್ವರ ದೇವಾಲಯದ ವೈಶಿಷ್ಟ್ಯಗಳು

**ಡಾ. ಜಯರಾಮ ಶೆಟ್ಟಿಗಾರ್**
ಮುಖ್ಯಸ್ಥರು, ಇತಿಹಾಸ ವಿಭಾಗ, ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ, ಕರ್ನಾಟಕ

**Abstract:**
*ಪಶ್ಚಿಮ ಕರಾವಳಿಯಲ್ಲಿ ಸಾಕಷ್ಟು ಪ್ರಾಚೀನ ದೇವಾಲಯಗಳಿವೆ. ಇಲ್ಲಿನ ಬಹುತೇಕ ದೇವಾಲಯಗಳು ಶೈವ ಪಂಥಕ್ಕೆ ಸೇರಿದವುಗಳಾಗಿವೆ. ಪಶ್ಚಿಮ ಕರಾವಳಿಯ ಮಾತ್ರವಲ್ಲದೆ ಭಾರತೀಯ ಧಾರ್ಮಿಕತೆಯಲ್ಲಿ ಶೈವಪಂಥಕ್ಕೆ ಪ್ರಮುಖ ಸ್ಥಾನವಿದೆ. ಶೈವ ಧರ್ಮದ ಮೂಲ ಆಗಮಗಳು. ಶೈವ ಪಂಥದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತಾದ್ವೈತ ಎನ್ನುವ ನಾಲ್ಕು ಪಂಗಡಗಳಿವೆ. ಪಶ್ಚಿಮ ಕರಾವಳಿಯ ಪಾಶುಪತ ಶೈವ ಪಂಗಡವೂ ಇತ್ತು. ಇಲ್ಲಿ ಜನಪದ, ವೈದಿಕ, ಜೈನ ಹಾಗೂ ಬೌದ್ಧ ಮತಗಳ ಸ್ಮಾರಕಗಳು ಕಂಡುಬರುತ್ತವೆ. ಇಲ್ಲಿನ ದೇವಾಲಯಗಳು ಹೆಚ್ಚಾಗಿ ಶೈವ ಅಥವಾ ಶೈವ ಸಂಬಂಧೀ ದೇವಾಲಯಗಳಾಗಿವೆ. ಶಾಕ್ತಾರಾಧನೆಯು ಶೈವಪಂಥದ ಅವಿಭಾಜ್ಯಅಂಗವಾಗಿದೆ. ಪಶ್ಚಿಮ ಕರಾವಳಿಯ ಶೈವ ದೇವಾಲಯಗಳಲ್ಲಿ ಪಂಚಲಿಂಗೇಶ್ವರ ದೇವಾಲಯಗಳು ಬಹಳ ಮುಖ್ಯವಾದವುಗಳಾಗಿವೆ. ಪಶ್ಚಿಮ ಕರಾವಳಿಯಾದ್ಯಂತ ಹಲವಾರು ಪಂಚಲಿಂಗೇಶ್ವರ ದೇವಾಲಯಗಳಿದ್ದು ಅವುಗಳಲ್ಲಿ ವಿಟ್ಲ, ಬಾರಕೂರು, ದೇರಾಜೆ, ಪಂಜ ಎಡ ಮಂಗಲ, ಈಶ್ವರ ಮಂಗಲ, ಕಂಬಾರು, ಕಾವು, ಚಾರ್ಮಾಡಿ, ಕಾಶಿಪಟ್ಣ, ಬಳಂಜ, ಸಾಸ್ತಾನದ ಪಂಚಲಿಂಗೇಶ್ವರ ದೇವಾಲಯಗಳು ಬಹಳ ಮುಖ್ಯವಾದವುಗಳಾಗಿವೆ. ಇಲ್ಲಿನ ಪ್ರಾಚೀನ ಶೈವ ದೇವಾಲಯಗಳನ್ನು ಗಜಪೃಷ್ಠಾಕಾರದಲ್ಲಿ ನಿರ್ಮಿಸಲಾಗಿದೆ. ಶಿವನನ್ನು ಪಂಚಲಿಂಗಗಳ ರೂಪದಲ್ಲಿ ಆರಾಧಿಸಲಾಗುತ್ತಿದೆ.*

**Keywords:** *ಪಶ್ಚಿಮ ಕರಾವಳಿ, ಪಂಚಲಿಂಗೇಶ್ವರ ದೇವಾಲಯ, ಗಜಪೃಷ್ಠಾಕಾಡಿ, ಮುಖ ಮಂಟಪ, ನಂದಿಮಂಟಪ, ನವರಂಗ, ಸುಖನಾಸಿ, ಗರ್ಭಗೃಹ.*

**ಪೀಠಿಕೆ**

ಪಶ್ಚಿಮ ಕರಾವಳಿಯ ಜನರ ಬದುಕಿನಲ್ಲಿ ಧಾರ್ಮಿಕತೆಯು ಬಹಳ ಆಳವಾಗಿ ಬೇರೂರಿದೆ. ತುಳುನಾಡಿನಲ್ಲಿ ಹಲವಾರು ಜನಸಮುದಾಯಗಳು ನೆಲೆಸಿದ್ದು, ಪ್ರತಿಯೊಂದು ಸಮುದಾಯಗಳು ತಮ್ಮದೇ ದೇವಾಲಯಗಳನ್ನು ಹೊಂದಿವೆ. ಇಲ್ಲಿನ ದೇವಾಲಯಗಳನ್ನು ಸೀಮೆ ದೇವಾಲಯ, ಗ್ರಾಮ ದೇವಾಲಯ, ಮಾಗಣೆ ದೇವಾಲಯ, ಕುಟುಂಬ ದೇವಾಲಯ ಎಂಬುವುದಾಗಿ ವಿಂಗಡಿಸಬಹುದಾಗಿದೆ. ತುಳುನಾಡಿನ ಹೆಚ್ಚಿನ ಪ್ರಾಚೀನ ದೇವಾಲಯಗಳು ಶೈವ ಪಂಥಕ್ಕೆ ಸೇರಿದವುಗಳಾಗಿವೆ. ಶೈವಾರಾಧನೆಯ ಆರಂಭಿಕ ಹಂತವನ್ನು ಹರಪ್ಪಾ ಸಂಸ್ಕೃತಿಯಲ್ಲಿ ಗುರುತಿಸಬಹುದಾಗಿದೆ. ಇಲ್ಲಿ ಧ್ಯಾನ ಮುದ್ರೆಯಲ್ಲಿ ಕುಳಿತಿರುವ ಪುರುಷ, ಆತನ ತಲೆಯಲ್ಲಿ ತ್ರಿಶೂಲಾಕಾರದ ಕೊಂಬು, ಸುತ್ತಲೂ ಪ್ರಾಣಿಗಳನ್ನು ಬಿಂಬಿಸಿರುವಂತಹ ಮುದ್ರೆಯು ಬಹಳ ಮುಖ್ಯವಾದುದಾಗಿದೆ. ಆ ಮುದ್ರೆಯನ್ನು ಪಶುಪತಿ ಎಂದು ಕರೆಯಲಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ

***Please cite this article as:*** ಜಯರಾಮ ಶೆಟ್ಟಿಗಾರ್. (2024). ಪಶ್ಚಿಮ ಕರಾವಳಿಯ ಪಂಚಲಿಂಗೇಶ್ವರ ದೇವಾಲಯದ ವೈಶಿಷ್ಟ್ಯಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(1), 8–15

ಪಶುಪತಿಯ ಕುರಿತಂತೆ ಅತೀ ಪ್ರಾಚೀನ ಉಲ್ಲೇಖಗಳಲ್ಲಿ ಒಂದಾಗಿದೆ. ಪಶುಪತಿ ಎಂದರೆ ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೆ ಪತಿ ಎಂದರ್ಥ. ನಂತರದ ಕಾಲದಲ್ಲಿ ಆತನನ್ನು ಎಲ್ಲಾ ಜೀವಕೋಟಿಗಳಿಗೂ ಪತಿ ಎಂದು ಪೂಜಿಸಲಾಗುತ್ತಿದೆ. ಈ ರೀತಿಯಾಗಿ ಹರಪ್ಪಾ ಸಂಸ್ಕೃತಿಯ ಪಶುಪತಿಯ ವೈದಿಕ ಸಂಸ್ಕೃತಿಯ ಶಿವನಾಗಿ, ರುದ್ರನಾಗಿ ವೇದಗಳಲ್ಲಿ ಸ್ಥಾನವನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ.

ಪ್ರಾಗೈತಿಹಾಸಿಕ ಕಾಲದಿಂದ ಪ್ರಾರಂಭಗೊಂಡು, ವೈದಿಕ ಕಾಲದಲ್ಲಿ ನಂತರ ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಪ್ರಧಾನ ದೇವರಾಗಿ ಪೂಜಿಸಲ್ಪಟ್ಟ ಶಿವನ ಆರಾಧಕರನ್ನು ಶೈವರೆಂದು ಕರೆಯಲಾಗುತ್ತದೆ. ಶೈವ ಧರ್ಮದ ಮೂಲ ಆಗಮಗಳು. ಶೈವ ಪಂಥದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತಾದ್ವೈತ ಎನ್ನುವ ನಾಲ್ಕು ಪಂಗಡಗಳಿವೆ. ಶೈವ ದರ್ಶನಕ್ಕೆ "ಶಿವತತ್ವ"ದಿಂದ ಆರಂಭವಾಗಿ "ಪ್ರಥಿವೀ ತತ್ವ" ದ ತನಕ ಮೂವತ್ತಾರು ತತ್ವಗಳಿವೆ. ತುಳುನಾಡಿನಲ್ಲಿಯೂ ಶೈವಾರಾಧನೆಯು ಶೈವ ಪಂಥದ ವಿವಿಧ ದರ್ಶನಗಳ ಮೂಲಕವಾಗಿ ತನ್ನ ಅಸ್ಥಿತ್ವವನ್ನು ಸ್ಥಾಪಿಸಿಕೊಂಡಿದೆ. ಶೈವ ಧರ್ಮದಲ್ಲಿ ಕಾಳಮುಖ, ಲಾಕುಳ, ಪಾಶುಪತ, ಕಪಾಲಿಕ, ಗಾಣಪತ್ಯ, ಬೈರವ, ವೀರಭದ್ರ, ಶಾಕ್ತಾ ಮುಂತಾದ ಪಂಗಡಗಳಿವೆ. ದ್ವೈತ ಶೈವ ದರ್ಶನದಲ್ಲಿ ಪಾಶುಪತಶೈವ ದರ್ಶನ ಹಾಗೂ ಸಿದ್ಧಾಂತ ಶೈವ ದರ್ಶನಗಳೆಂಬ ಎರಡು ಪಂಗಡಗಳು ಕಂಡುಬರುತ್ತವೆ. ಕ್ರಿ.ಶ. 8ನೇ ಶತಮಾನದ ಆರಂಭಿಕ ಕಾಲದ ಉದ್ಯಾವರದ ಶಾಸನದಲ್ಲಿ "ಪಾಶುಪತ ನಂಬಿರಾನ್" ಎನ್ನುವ ಉಲ್ಲೇಖದ ಆಧಾರದಲ್ಲಿ ತುಳುನಾಡಿನಲ್ಲಿ ಪಾಶುಪತ ಶೈವ ಪಂಗಡವಿತ್ತೆಂದು ಅಭಿಪ್ರಾಯಪಡಲಾಗಿದೆ. ಪಾಶುಪತ ದರ್ಶನಕ್ಕೆ ಸಂಬಂದಿಸಿದ ಯಾವ ಗ್ರಂಥವೂ ಇದುವರೆಗೆ ಲಭ್ಯವಿಲ್ಲ. ಆದರೆ ರಾಜಶೇಖರನು ರಚಿಸಿರುವ "ಷಡ್ ದರ್ಶನ ಸಮುಚ್ಚಯ"ದಲ್ಲಿ ಪಾಶುಪತ ದರ್ಶನದ ಉಲ್ಲೇಖವಿದೆ. ಕರ್ನಾಟಕ ಹಾಗೂ ಆಂದ್ರ ಪ್ರಾಂತ್ಯಗಳಲ್ಲಿ ನೆಲೆಸಿದ್ದ ಲುಕುಲೀಶ ಪಾಶುಪತವು ಕಾಳಮುಖ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಕಾಳಮುಖರ ಮೂಲಸ್ಥಾನ ಶ್ರೀಶೈಲ. ದ್ವೈತ ಶೈವ ಸಿದ್ಧಾಂತ ದರ್ಶನದಲ್ಲಿ ಶಿವನನ್ನು ಪಶುಪತಿ ಎಂದು ಕರೆಯಲಾಗಿದೆ. ಆರಂಭಿಕ ಆಳೂಪರು ಶಿವನನ್ನು ಪಶುಪತಿ ರೂಪದಲ್ಲಿ ಆರಾಧಿಸುತ್ತಿದ್ದರು ಎನ್ನುವುದು ಸ್ಪಷ್ಟವಾಗಿದೆ. ಕನ್ನಡದ ಅತೀಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನದಲ್ಲಿ 'ಅಳಪ ಗಣ ಪಶುಪತಿ' ಎನ್ನುವ ಉಲ್ಲೇಖವಿದೆ. ದ್ವೈತ ಶೈವಸಿದ್ಧಾಂತ ದರ್ಶನದ ಪಾಶುಪತ ಪಂಗಡವು ಗುಜರಾತ್ ಮಧ್ಯಪ್ರದೇಶ ಹಾಗೂ ಚೋಳ ರಾಜ್ಯದಲ್ಲಿ ಹೆಚ್ಚು ಪ್ರಚಾರದಲ್ಲಿತ್ತು. ನಾಥಪಂಥದ ಪ್ರಸಾರ, ಶಂಕರಾಚಾರ್ಯರ ಪ್ರಭಾವ ಹಾಗೂ ಸ್ಮಾರ್ಥ ಸಂಪ್ರದಾಯಗಳು ತುಳುನಾಡಿನಲ್ಲಿ ಶೈವ ಪಂಥದ ಬೆಳವಣಿಗೆಯಲ್ಲಿ ಬಹಳ ಮುಖ್ಯ ಪಾತ್ರವಹಿಸಿರುವುದು ಕಂಡುಬರುತ್ತದೆ. ಕ್ರಿ.ಶ.7ನೇ ಶತಮಾನದಿಂದಲೇ ತುಳುನಾಡಿನಲ್ಲಿ ಶೈವ ದೇವಾಲಯಗಳು ನಿರ್ಮಾಣಗೊಂಡವು. ಉದ್ಯಾವರದ ಶಂಭುಕಲ್ಲು ದೇವಾಲಯವು ತುಳುನಾಡಿನ ಅತೀ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ.

ಪಶ್ಚಿಮ ಕರಾವಳಿಯಲ್ಲಿ ಶಿವನನ್ನು ಅನಂತೇಶ್ವರ, ಚಂದ್ರಮೌಳೀಶ್ವರ, ಕಿರುಮಂಜೇಶ್ವರ, ತುಳುವೇಶ್ವರ, ಶೈನೇಶ್ವರ, ವರದೇಶ್ವರ, ಸದಾಶಿವ, ವಿಶ್ವನಾಥ, ಮಂಜುನಾಥ, ಕಾಂತೇಶ್ವರ, ಕೋಟೇಶ್ವರ, ಮೃತ್ಯುಂಜಯ, ಮಹಾದೇವ, ಉಮಾಮಹೇಶ್ವರ, ಪಂಚಲಿಂಗೇಶ್ವರ, ವೀರೇಶ್ವರ, ಅರ್ಧನಾರೀಶ್ವರ, ತಿಮಿರೇಶ್ವರ ಎಂಬಿತ್ಯಾದಿ ಹೆಸರುಗಳಿಂದ ಆರಾಧಿಸಲಾಗುತ್ತಿದೆ. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ತುಳುನಾಡಿಗೆ ವಿಶಿಷ್ಟವಾದ ಸ್ಥಾನವಿದೆ. ತುಳುನಾಡಿನ ಧಾರ್ಮಿಕ ಅಧ್ಯಯನಕ್ಕೆ ಸಮಬಂಧಿಸಿದಂತೆ ಐತಿಹ್ಯಗಳು, ಜನರ ನಂಬಿಕೆಗಳು, ಮೌಖಿಕ ಪರಂಪರೆಗಳು, ಶಾಸನಗಳು ಮತ್ತು ಸ್ಮಾರಕಗಳು ಮೂಲಾಧಾರಗಳಾಗಿವೆ.

ಆಳೂಪರ ಹಾಗೂ ವಿಜಯನಗರ ಕಾಲದ ಶಾಸನಗಳು ಮಾತ್ರವಲ್ಲದೆ ಸ್ಥಳೀಯ ಅರಸುಮನೆತನಗಳ ಶಾಸನಗಳು ಇಲ್ಲಿನ ಧಾರ್ಮಿಕ ನಂಬಿಕೆ, ಆಚರಣೆಗಳು, ದೇವಾಲಯಗಳು ಮತ್ತು ಅವುಗಳಿಗೆ ನೀಡಿ ದಾನಗಳು, ಅವುಗಳ ಪುನರುಜ್ಜೀವನ ಕುರಿತಂತೆ ಅನೇಕ ರೀತಿಯ ಮಾಹಿತಿಗಳನ್ನು ನೀಡುತ್ತವೆ. ತುಳುನಾಡಿನಲ್ಲಿ ಶೈವಾರಾಧನೆಯ ಕುರಿತಂತೆ ಶಾಸನೋಕ್ತ ಉಲ್ಲೇಖಗಳು ಕ್ರಿ.ಶ. 7ನೇ ಶತಮಾನದಿಂದಲೇ ಆರಂಭಗೊಳ್ಳುತ್ತವೆ. ಆಳೂಪ ದೊರೆ ಒಂದನೆ ಆಳುವರಸನ ಕಿಗ್ಗ ಶಾಸನದಲ್ಲಿ ಶಿವನಿಗೆ ದಾನ ನೀಡಿದ ಉಲ್ಲೇಖವಿದೆ. ಆಳುವರಸನ ಉತ್ತರಾಧಿಕಾರಿ ಒಂದನೇ ಚಿತ್ರವಾಹನನು ಕೂಡ ಶೈವಾರಾಧಕನಾಗಿದ್ದನೆಂಬುದು ಚಾಲುಕ್ಯ ವಿನಯಾಧಿತ್ಯನ ಹರಿಹರ ಹಾಗೂ ಸೊರಬ ಶಾಸನಗಳಿಂದ ತಿಳಿದುಬರುತ್ತದೆ. ಪ್ರಾಚೀನ ಆಳೂಪ ದೊರೆಗಳಾದ ಎರಡನೆಯ ಆಳುವರಸನ ಶಾಸನ ಹಾಗೂ ಮಾರಮ್ಮನ ಶಾಸನಗಳಲ್ಲಿ ಶೈವ ಅರ್ಚಕರಾದ ಗೊರವರ ಉಲ್ಲೇಖಗಳಿವೆ. ಆಳುಪ ದೊರೆಗಳು ಶೈವ ಅರ್ಚಕರಾದ ಗೊರವರನ್ನು ಗೌರವಿಸುತ್ತಿದ್ದರೆನ್ನುವುದು ಆಳೂಪರ ಶಾಸನಗಳ ಆದಾರದಿಂದ ಹೇಳಬಹುದಾಗಿದೆ. ಆದರೆ ಶಾಸನದ ದಾಖಲೆಯ ಕಾಲಕ್ಕಿಂತ ಬಹಳ ಮೊದಲೇ ಶೈವಪಂಥವು ಆಚರಣೆಯಲ್ಲಿದ್ದು, ಶೈವಪಂಥದ ದೇವಾಲಯಗಳನ್ನು ತುಳುನಾಡಿನಲ್ಲಿ ಸ್ಥಾಪಿಸಲಾಗಿತ್ತೆಂದು ಅಲ್ಲಿನ ಶೈವ ಸ್ಮಾರಕಗಳ ಆಧಾರದಿಂದ ಹೇಳಬಹುದಾಗಿದೆ. ಈ ಪ್ರದೇಶದ ಹೆಚ್ಚಿನ ಪ್ರಾಚೀನ ದೇವಾಲಯಗಳ ಸ್ಥಾಪನೆಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಕಂಡುಬರುವುದಿಲ್ಲ. ಹಾಗಾಗಿ ಅವುಗಳ ಕಾಲಮಾನ ಯಾವುದೆಂದು ತಿಳಿದುಬರುವುದಿಲ್ಲ. ಈ ದೇವಾಲಯಗಳಿಗೆ ರಾಜರು ಅಧಿಕಾರಿಗಳು, ವ್ಯಾಪಾರಿಗಳು ಹಾಗೂ ಭಕ್ತ ಸಮುದಾಯದಿಂದ ನೀಡಲ್ಪಟ್ಟ ದಾನಗಳು ದಾಖಲೆಗೊಂಡಿವೆ.

ತುಳುನಾಡಿನಲ್ಲಿ ಕಂಡುಬರುವ ಹೆಚ್ಚಿನ ಸ್ಮಾರಕಗಳು ಧಾರ್ಮಿಕ ಸ್ಮಾರಕಗಳಾಗಿವೆ. ಇಲ್ಲಿ ಜನಪದ, ವೈದಿಕ, ಜೈನ ಹಾಗೂ ಬೌದ್ಧ ಮತಗಳ ಸ್ಮಾರಕಗಳು ಕಂಡುಬರುತ್ತವೆ. ಇಲ್ಲಿನ ದೇವಾಲಯಗಳು ಹೆಚ್ಚಾಗಿ ಶೈವ ಅಥವಾ ಶೈವ ಸಂಬಂಧೀ ದೇವಾಲಯಗಳಾಗಿವೆ. ಆಳೂಪರ ಆರಂಭಿಕ ಶಾಸನಗಳಲ್ಲಿ ಉಲ್ಲೇಖಗೊಂಡಂತೆ ಉದ್ಯಾವರದ ಚಂಬುಕಲ್ಲು/ಶಂಭುಕಲ್ಲು ಶಿವಾಲಯವು ತುಳುನಾಡಿನ ಅತೀ ಪ್ರಾಚೀನ ದೇವಾಲಯಗಳಲ್ಲೊಂದಾಗಿದೆ. ತುಳುನಾಡಿನಲ್ಲಿ ಅನೇಕ ಊರುಗಳ ಹೆಸರುಗಳು ಶೈವ ಸಂಬಂಧೀ ಹೆಸರುಗಳಾಗಿವೆ. ಶಿವಳ್ಳಿ, ಕೋಟೇಶ್ವರ, ಕುಂದಾಪುರ, ಸೋಮೇಶ್ವರ, ಸಕ್ಲೇಶ್ವರ, ಪಂಜ, ಶಿಬಾಜೆ, ಶಿವಪುರ, ಇತ್ಯಾದಿ ಹೆಸರುಗಳು ಶೈವ ಸಂಬಂಧೀ ಹೆಸರುಗಳಾಗಿವೆ. ಕರ್ನಾಟಕದ ಅತೀ ಪ್ರಾಚೀನ ಕನ್ನಡ ತಾಮ್ರಶಾಸನವಾದ ಬೆಳ್ಮಣ್ಣು ತಾಮ್ರ ಶಾಸನದಲ್ಲಿ ಶಿವಳ್ಳಿಯ ಉಲ್ಲೇಖವಿದೆ. 'ಓಂ ನಮಃಶಿವಾಯ' ಎನ್ನುವ ಶ್ಲೋಕದೊಂದಿಗೆ ಆ ಶಾಸನವು ಪ್ರಾರಂಭಗೊಳ್ಳುತ್ತದೆ. ಕ್ರಿ.ಶ. 8ನೆಯ ಶತಮಾನದ ಬೆಳ್ಮಣ್ಣು ತಾಮ್ರ ಶಾಸನದಲ್ಲಿ ಉಲ್ಲೇಖಿಸಿದಂತೆ ಆ ಶಾಸನವನ್ನು ರಕ್ಷಿಸಿದವರಿಗೆ '*ಅನನ್ಯ ಪುಣ್ಯಂ ಅಶ್ವಮೇಧ ಫಲವಕ್ಕುಂ ಶಿವಳ್ಳಿಗೆ ಪುಣ್ಣವರ್ಧನಕ್ಕೆ ಗೋಸಹಾಸ್ರ ಕೊಟ್ಟ ಫಲವಕ್ಕುಂ ಇದನಳಿವೋರುಂ ಬಕ್ರಬರ್ಪ್ಪೋರುಂ ಪಂಚಮಹಾ ಪಾತಕರಪ್ಪೊರ್ ಇಪ್ಪತ್ತೊಂದು ನರಖದುಳಿ ಪ್ಪಾರ್ ವಾರಣಾಶಿಯುಂ ಶಿವವಳ್ಳಿಯುಮುನರಿದ ಪಾಪವಕ್ಕುಂ*' ಎಂದಿದೆ. ಶಿವಳ್ಳಿಯನ್ನು ಶಾಸನಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. 7–8ನೇ ಶತಮಾನದ ಶಾಸನಗಳಲ್ಲಿ ಶಿವಳ್ಳಿಯ ಉಲ್ಲೇಖ ಕಂಡುಬರುತ್ತದೆ. ಈಗ ನಾವು ಗುರುತಿಸುವ ಉಡುಪಿ ಹಾಗೂ ಅದರ ಪರಿಸರವು ಈ ಹಿಂದೆ ಶಿವಳ್ಳಿಯಾಗಿತ್ತೆಂದು ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಶಿವಳ್ಳಿಗೆ ವಾರಣಾಸಿಯಷ್ಟೇ ಮಹತ್ವವಿತ್ತು. ಕನ್ನಡದ ಅತೀ ಪ್ರಾಚೀನ ತಾಮ್ರ ಶಾಸನವಾಗಿರುವ

ಬೆಳ್ಮಣ್ಣು ತಾಮ್ರ ಶಾಸನದ ಕೊನೆಯಲ್ಲಿ ಶಾಸನವನ್ನು ಕಾಪಾಡಿದವರಿಗೆ ಶಿವಳ್ಳಿ ಮತ್ತು ಪುಂಡ್ರವರ್ಧನವೆಂಬೀ ಧರ್ಮಕ್ಷೇತ್ರಗಳಲ್ಲಿ ಸಾವಿರ ಹಸುಗಳನ್ನು ದಾನಕೊಟ್ಟ ಫಲ. ಈ ಆಜ್ಞೆಯನ್ನು ಮೀರಿದವರಿಗೆ ವಾರಣಾಸಿಯನ್ನೂ ಶಿವಳ್ಳಿಯನ್ನೂ ಅಳಿದ ಪಾಪ ಎಂದಿದೆ. ಕ್ರಿ.ಶ. 9ನೆಯ ಶತಮಾನದ ಉದ್ಯಾವರ ಶಾಸನದ ಕೊನೆಯಲ್ಲಿ ಆ ಶಾಸನವನ್ನು ಅಳಿದವರಿಗೆ ವಾರಣಾಸಿಯನ್ನೂ ಶಿವಳ್ಳಿಯನ್ನೂ ನಾಶಮಾಡಿದ ಪಾಪ ಎಂದಿದೆ. ಅಲ್ಲಿನ ಇನ್ನೊಂದು ಶಾಸನದ ಕೊನೆಯಲ್ಲಿ ಅದನ್ನು ನಾಶಮಾಡಿದವರಿಗೆ ಶಿವಳ್ಳಿಯ ಬ್ರಹ್ಮಪುರಮುಮರಿದ ಮಹಾಪಾತಕ ಎಂದಿದೆ, ಹೆಸರೇ ಸೂಚಿಸುವಂತೆ ಇದು ಶಿವನ ಸ್ಥಳ ಅಂದರೆ ಶೈವರೇ ಹೆಚ್ಚಾಗಿದ್ದ ಸ್ಥಳವಾಗಿತ್ತು. ಪ್ರಾಚೀನ ಜನವಸತಿ ಕೇಂದ್ರವಾದ ಶಿವಳ್ಳಿಯಲ್ಲಿ ಶಿವ ಪ್ರಧಾನ ದೇವರು. ಹಾಗಾಗಿ ಈ ಪ್ರದೇಶವನ್ನು ಶಿವಳ್ಳಿ ಎಂದು ಕರೆಯಲಾಯತು. ಇಲ್ಲಿ ಪ್ರಾಚೀನ ಶಿವಾಲಯಗಳು ಇಂದಿಗೂ ಇವೆ.

**ಪಶ್ಚಿಮ ಕರಾವಳಿಯ ಪಂಚಲಿಂಗೇಶ್ವರ ದೇವಾಲಯಗಳು**

ಪಶ್ಚಿಮ ಕರಾವಳಿಯ ಶೈವ ದೇವಾಲಯಗಳಲ್ಲಿ ಪಂಚಲಿಂಗೇಶ್ವರ ದೇವಾಲಯಗಳು ಬಹಳ ಮುಖ್ಯವಾದವುಗಳಾಗಿವೆ. ತುಳುನಾಡಿನ ಉದ್ದಗಲಕ್ಕೂ ಪಂಚಲಿಂಗೇಶ್ವರ ದೇವಾಲಯಗಳಿವೆ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಹಾಗೂ ಈಶಾನ ಎಂಬ ಶಿವನ ಐದು ರೂಪಗಳಲ್ಲಿ ಲಿಂಗಗಳ ರೂಪದಲ್ಲಿ ಪೂಜಿಸುವುದು ತುಳುನಾಡಿನಲ್ಲಿ ಮಾತ್ರವಲ್ಲದೆ ಭಾರತದ ಇತರೆಡೆಗಳಲ್ಲಿಯೂ ಕಂಡುಬರುತ್ತದೆ. ಮಂಡ್ಯ ಜಿಲ್ಲೆಯ ಗೋವಿಂದ ಹಳ್ಳಿಯ ಪಂಚಲಿಂಗೇಶ್ವರ ದೇವಾಲಯವು ಪಂಚ ಕೂಟ ಶೈಲಿಯಲ್ಲಿದ್ದರೆ ಒರಿಸ್ಸಾದ ಬಲ್ಲೂರ್ ಪಂಚಲಿಂಗೇಶ್ವರ ದೇವಾಲಯದ ಐದು ಲಿಂಗಗಳು ನಿಸರ್ಗದತ್ತವಾದ ತೊರೆಯಲ್ಲಿ ಮುಳುಗಿದ್ದು ಅದನ್ನು ಸ್ವಯಂಭೂಲಿಂಗಗಳೆಂದು ಕರೆಯಲಾಗುತ್ತಿದೆ. ಅಲ್ಲಿನ ಪಂಚಲಿಂಗಗಳು ಯಾವುದೇ ಕೆತ್ತನೆಗಳಿಲ್ಲದ, ಪ್ರಕೃತಿದತ್ತವಾದ ಶಿಲಾಖಂಡಗಳಾಗಿದ್ದು ಶಿವಲಿಂಗ ಗಳೆಂದು ಪೂಜಿಸಲಾಗುತ್ತಿದೆ. ತುಳುನಾಡಿನಾದ್ಯಂತ ಹಲವಾರು ಪಂಚಲಿಂಗೇಶ್ವರ ದೇವಾಲಯಗಳಿದ್ದು ಅವುಗಳಲ್ಲಿ ವಿಟ್ಲ, ಬಾರಕೂರು, ದೇರಾಜೆ, ಪಂಜ ಎಡ ಮಂಗಲ, ಈಶ್ವರ ಮಂಗಲ, ಕಂಬಾರು, ಕಾವು, ಚಾರ್ಮಾಡಿ, ಕಾಶಿಪಟ್ನ, ಬಳಂಜ, ಸಾಸ್ತಾನದ ಪಂಚಲಿಂಗೇಶ್ವರ ದೇವಾಲಯಗಳು ಬಹಳ ಮುಖ್ಯವಾದವುಗಳಾಗಿವೆ. ಶಿವನನ್ನು ಮಾತ್ರವಲ್ಲದೆ, ಶೈವಪಂಥದ ಮಾತೃದೇವತೆಯನ್ನು ಕೂಡ ಪಂಚಲಿಂಗಗಳಲ್ಲಿ ಪೂಜಿಸುವ ಕ್ರಮ ತುಳುನಾಡಿನಲ್ಲಿದ್ದು, ಅದು ಪಂಚಲಿಂಗೇಶ್ವರ ಆರಾಧನೆಯು ಎಷ್ಟೊಂದು ಆಳವಾಗಿ ಬೇರೂರಿತ್ತೆನ್ನುವುದಕ್ಕೆ ಸಾಕ್ಷಿಯಾಗಿದೆ. ಮಹೇಶ್ವರಿಯನ್ನು ದುರ್ಗೆ ಎಂದು ತುಳುನಾಡಿನಲ್ಲಿ ಪೂಜಿಸಲಾಗುತ್ತಿದೆ. ಉಳ್ಳಾಲದ ಸೋಮನಾಥ ದೇವಾಲಯದಲ್ಲಿ ಪಂಚದುರ್ಗೆಯರನ್ನು ಪಂಚಲಿಂಗಗಳಲ್ಲಿ ಪೂಜಿಸಲಾಗುತ್ತಿದೆ. ಪಂಚದುರ್ಗೆಯರ ಪಂಚಲಿಂಗಗಳನ್ನು ಒಂದೇ ವಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಬೆಳ್ತಂಗಡಿ ತಾಲ್ಲೂಕಿನ ಕೊಯ್ಯೂರಿನಲ್ಲಿ ಹಾಗೂ ಅರಂಬೋಡಿಗಳಲ್ಲಿ ಪಂಚದುರ್ಗಾ ದೇವಾಲಯವಿದೆ. ಕೊಯ್ಯೂರಿನ ಪಂಚದುರ್ಗಾ ದೇವಾಲಯವು ಮೊದಲು ತುಳುವರ ಪಂಚಧೂಮಾವಾತಿ ದೈವಾಲಯವಾಗಿದ್ದು ನಂತರ ವೈದಿಕ ಪಂಥದ ಪ್ರಭಾವದಿಂದಾಗಿ ಪಂಚದುರ್ಗಾದೇವಾಲಯವಾಗಿ ರೂಪಾಂತರಗೊಂಡಿದೆ. ಸಪ್ತಮಾತ್ರಿಕೆ ಎಂದು ಕರೆಯಲ್ಪಡುವ ಏಳೂ ಮಾತೃ ದೇವತೆಗಳನ್ನು ಕೂಡ ಲಿಂಗರೂಪದಲ್ಲಿ ಆರಾಧಿಸುವುದು ತುಳುನಾಡಿನಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಸಪ್ತಮಾತ್ರಿಕೆಯರ ಲಿಂಗವನ್ನು ಪೀಠದ ಮೇಲೆ ಸ್ಥಾಪಿಸಲಾಗಿದೆ. ಆದರೆ ವಿಶೇಷವೆಂದರೆ ಕೆಲವೆಡೆ ಸಪ್ತಮಾತ್ರಿಕೆಯರ ಐದು ಅಥವಾ ಆರು ಲಿಂಗಗಳಿದ್ದು ಅವುಗಳೊಂದಿಗೆ ಗಣಪತಿ, ವೀರಭದ್ರ ಹಾಗೂ ಸುಬ್ರಮಣ್ಯನನ್ನು ಕೂಡ ಆರಾಧಿಸಲಾಗುತ್ತಿದೆ. ಕ್ರಿ.ಶ.

7ನೇ ಶತಮಾನಕ್ಕಾಗಲೇ ತುಳುನಾಡಿನಲ್ಲಿ ಸಪ್ತಮಾತ್ರಿಕೆಯರನ್ನು ಆರಾಧಿಸಲಾಗುತ್ತಿತ್ತೆನ್ನುವುದು ಪೊಳಲಿ ಶಾಸನದಿಂದ ತಿಳಿದುಬರುತ್ತದೆ.

**ಪಂಚಲಿಂಗೇಶ್ವರ ದೇವಾಲಯಗಳ ವಾಸ್ತು ಶಿಲ್ಪ**

ಪಶ್ಚಿಮ ಕರಾವಳಿಯ ದೇವಾಲಯಗಳನ್ನು ಅವುಗಳ ತಳಪಾಯದ ಆಧಾರದ ಮೇಲೆ ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ ಗಜಪೃಷ್ಠಾಕಾರದ ದೇವಾಲಯಗಳು, ಚೌಕಾಕಾರದ ದೇವಾಲಯಗಳು, ಆಯತಾಕಾರದ ದೇವಾಲಯಗಳು ಹಾಗೂ ವೃತ್ತಾಕಾರದ ಅಥವಾ ಮಂಡಲಾಕಾರದ ದೇವಾಲಯಗಳು. ತುಳುನಾಡಿನ ಪ್ರಾಚೀನ ಶೈವ ದೇವಾಲಯಗಳನ್ನು ಗಜಪೃಷ್ಠಾಕಾರದಲ್ಲಿ ನಿರ್ಮಿಸಲಾಗಿದೆ. ಪ್ರಾಚೀನ ಭಾರತದಲ್ಲಿ ದೇವಾಲಯದ ವಾಸ್ತುಶಿಲ್ಪದ ತೊಟ್ಟಿಲು ಎಂದು ಕರೆಯಲ್ಪಡುವ ಐಹೊಳೆಯ ದುರ್ಗಾ ದೇವಾಲಯವು ಪ್ರಾಚೀನ ದೇವಾಲಯಗಳಲ್ಲಿ ಅತ್ಯಂತ ಪ್ರಸಿದ್ಧವಾಗಿದೆ. ಈ ದೇವಾಲಯವನ್ನು ಆರಂಭಿಕ ವಿದ್ವಾಂಸರು 5ನೇ ಶತಮಾನದ ದೇವಾಲಯವೆಂದು ಗುರುತಿಸಿದ್ದಾರೆ, ಆದರೆ ಇದು 6ನೇ ಶತಮಾನದ ಉತ್ತರಾರ್ಧ ಮತ್ತು 7 ನೇ ಶತಮಾನದ ಆರಂಭದ ನಡುವೆ ನಿರ್ಮಿಸಿದ ದೇವಾಲಯವಾಗಿದೆ. ಭಾರತೀಯ ದೇವಾಲಯದ ವಾಸ್ತುಶಿಲ್ಪದ ವಿಕಾಸದಲ್ಲಿ ಐಹೊಳೆ ಪ್ರಮುಖ ಪಾತ್ರ ವಹಿಸಿದೆ. ಅಲ್ಲಿನ ದುರ್ಗಾ ದೇವಾಲಯವು ಗಜಪೃಷ್ಠಾಕಾರದಲ್ಲಿದ್ದು ಅದರ ಆಕಾರವು ಅಜಂತಾ ಗುಹೆಗಳಲ್ಲಿ ಕಂಡುಬರುವ 1ನೇ ಅಥವಾ 2ನೇ ಶತಮಾನದ ಬೌದ್ಧ ಚೈತ್ಯದ ಸಭಾಂಗಣಗಳನ್ನು ಹೋಲುತ್ತದೆ. ಈ ದೇವಾಲಯವು ಗಜಪೃಷ್ಠಾಕಾರದಲ್ಲಿ ನಿರ್ಮಿಸಲಾದ ದೇವಾಲಯಗಳಲ್ಲಿ ಅತೀ ಪ್ರಾಚೀನವಾದ ದೇವಾಲಯವಾಗಿದೆ. ಹಾಗಾಗಿ ದುರ್ಗಾ ದೇವಾಲಯವು ಬೌದ್ಧ ಚೈತ್ಯಾಲಯಗಳಿಂದ ಪ್ರೇರಿತವಾಗಿದೆ ಎಂದು ಅಭಿಪ್ರಾಯಪಡಲಾಗಿದೆ.

ತುಳುನಾಡಿನ ಪಂಚಲಿಂಗೇಶ್ವರ ದೇವಾಲಯಗಳನ್ನೂ ಕೂಡ ಗಜಪೃಷ್ಠಾಕಾರದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ವಿಟ್ಲದ ಪಂಚಲಿಂಗೇಶ್ವರ ದೇವಾಲಯ, ಬಾರಕೂರಿನ ಪಂಚಲಿಂಗೇಶ್ವರ ದೇವಾಲಯ, ಪಂಜ ಪಂಚಲಿಂಗೇಶ್ವರ ದೇವಾಲಯ, ಎಡಮಂಗಲ ಪಂಚಲಿಂಗೇಶ್ವರ ದೇವಾಲಯಗಳು ಗಜಪೃಷ್ಠಾಕಾರದಲ್ಲಿವೆ. ಹಾಗಾಗಿ ಈ ಎಲ್ಲಾ ದೇವಾಲಯಗಳೂ ಅತೀ ಪ್ರಾಚೀನವಾದವುಗಳೆಂದು ಹೇಳಬಹುದಾಗಿದೆ. ಬಾರಕೂರಿನ ಪಂಚಲಿಂಗೇಶ್ವರ ದೇವಾಲಯ ಪೂರ್ವಾಭಿಮುಖವಾಗಿದ್ದರೆ, ವಿಟ್ಲದ ಪಂಚಲಿಂಗೇಶ್ವರ ದೇವಾಲಯವು ಪಶ್ಚಿಮಾಭಿಮುಖವಾಗಿದೆ. ಬಾರಕೂರು ಪಂಚಲಿಂಗೇಶ್ವರ ದೇವಾಲಯವು ಗ್ರಾಮ ದೇವಾಲಯವಾದರೆ, ವಿಟ್ಲದ ಪಂಚಲಿಂಗೇಶ್ವರ ಹಾಗೂ ಪಂಜದ ಪಂಚಲಿಂಗೇಶ್ವರ ದೇವಾಲಯಗಳು ಆಯಾಯ ಸೀಮೆಯ ದೇವಾಲಯಗಳಾಗಿವೆ. ತುಳುನಾಡಿನ ಹೆಚ್ಚಿನ ದೇವಾಲಯಗಳಿಗೆ ಐತಿಹ್ಯಗಳಿದ್ದಂತೆ ಪಂಚಲಿಂಗೇಶ್ವರ ದೇವಾಲಯಗಳಿಗೂ ಐತಿಹ್ಯಗಳಿವೆ. ವಿಟ್ಲದ ಪಂಚಲಿಂಗೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಐತಿಹ್ಯದಂತೆ ಅಲ್ಲಿರುವ ಲಿಂಗಗಳು ಪಾಂಡವರಿಂದ ಪೂಜಿಸಲ್ಪಟ್ಟ ಲಿಂಗಗಳಾಗಿವೆ. ಬಾರಕೂರು ಪಂಚಲಿಂಗೇಶ್ವರ ದೇವಾಲಯದ ಐತಿಹ್ಯದಂತೆ ಮಾರ್ಕಾಂಡೇಶ್ವರ ಮುನಿಗಳು ಆ ಸ್ಥಳದಲ್ಲಿ ತಪಸ್ಸು ಮಾಡಿದ್ದು ಶಿವನು ಪ್ರತ್ಯಕ್ಷನಾದ ಸ್ಥಳವಾಗಿದೆ. ಹಾಗಾಗಿ ಮುನಿಗಳು ಅಲ್ಲಿ ಪಂಚಲಿಂಗೇಶ್ವರ ದೇವಾಲಯವನ್ನು ಸ್ಥಾಪಿಸಿದರು. ದೇರಾಜೆಯ ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗಗಳು ಪಾಂಡವರ ಪಣೆ ಎಂಬ ಸ್ಥಳದಲ್ಲಿ ದೊರೆತಿದ್ದು, ಮಹಾಭಾರತದ ಕಾಲದಲ್ಲಿ ಪಾಂಡವರು ಪೂಜಿಸಿದ ಲಿಂಗ ಎನ್ನುವ ಐತಿಹ್ಯವಿದೆ. ಎಡಮಂಗಲದ ಪಂಚಲಿಂಗೇಶ್ವರ ದೇವಾಲಯಕ್ಕೂ ಪಾಂಡವರು ಸಂದರ್ಶಿಸಿ ಪೂಜೆ ಸಲ್ಲಿಸಿದ್ದರು ಎನ್ನುವ ಐತಿಹ್ಯವಿದೆ.

ಬಳಂಜದ ಪಂಚಲಿಂಗೇಶ್ವರ ದೇವಾಲಯವು ಶಾಂಡಿಲ್ಯ ಮುನಿಗಳಿಂದ ಸ್ಥಾಪಿಸಲ್ಪಟ್ಟಿದ್ದು ಮತ್ತು ಮಹಾಭಾರತ ಕಾಲದಲ್ಲಿ ಪಂಚಪಾಂಡವರಿಂದ ಪೂಜಿಸಲ್ಪಟ್ಟ ಲಿಂಗಗಳು ಎನ್ನುವ ಐತಿಹ್ಯವಿದ್ದು, ಅದು ದೇವಾಲಯದ ಕೈಪಿಯತ್ತಿನಲ್ಲಿ ದಾಖಲಾಗಿದೆ.

**ಪಂಚಲಿಂಗೇಶ್ವರ ದೇವಾಲಯಗಳ ಪಂಚಲಿಂಗಗಳು**

ಹರಪ್ಪ ಸಂಸ್ಕೃತಿಯ ಕಾಲದಿಂದಲೂ ಉಪಾಸನೆಗೊಳ್ಳುತ್ತಿದ್ದ ಪಶುಪತಿ ಅಥವಾ ಶಿವ ಆರ್ಯರ ರುದ್ರನಾಗಿ ವೇದಗಳಲ್ಲಿ ಸ್ಥಾನ ಪಡೆದುಕೊಂಡನು. ಕ್ರಮೇಣ ಹಿಂದೂ ಸಂಸ್ಕೃತಿಯ ಪ್ರಧಾನ ದೇವರುಗಳಲ್ಲಿ ಒಬ್ಬನಾಗಿ ಆರಾಧಿಸಲ್ಪಟ್ಟನು. ಅಲ್ಲದೆ ಲಿಂಗರೂಪದಲ್ಲಿಯೂ ಉಪಾಸನೆಗೊಳ್ಳತೊಡಗಿದನು. ತುಳುನಾಡಿನಲ್ಲಿಯೂ ಶಿವನನ್ನು ಲಿಂಗ ರೂಪದಲ್ಲಿ ಹಾಗೂ ಪಂಚಲಿಂಗಗಳ ರೂಪದಲ್ಲಿ ಆರಾಧಿಸಲಾಗುತ್ತಿದೆ. ತುಳುನಾಡಿನ ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗಗಳು ಬಹಳ ವೈಶಿಷ್ಟ್ಯಪೂರ್ಣವಾಗಿವೆ. ಇಲ್ಲಿನ ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗಗಳನ್ನು ಒಂದೇ ಪೀಠದ ಮೇಲೆ ಸ್ಥಾಪಿಸಲಾಗಿದೆ. ಅಲ್ಲದೆ ಅಲ್ಲಿನ ಪೀಠಗಳನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ಆದರೆ ಅವುಗಳ ಮೇಲೆ ಪ್ರತಿಷ್ಠಾಪಿಸಲ್ಪಟ್ಟ ಪಂಚಲಿಂಗಗಳು ನೈಸರ್ಗಿಕವಾಗಿ ದೊರೆತ ಶಿಲಾಖಂಡಗಳಾಗಿವೆ. ಅವುಗಳನ್ನು ಕೆತ್ತಿ ಹೊಸ ರೂಪವನ್ನು ನೀಡಲಾಗಿಲ್ಲ. ಅಲ್ಲದೆ ಎಲ್ಲಾ ಐದು ಲಿಂಗಗಳು ವಿಭಿನ್ನ ಆಕಾರದವುಗಳಾಗಿವೆ. ಒರಿಸ್ಸಾದ ಪಂಚಲಿಂಗೇಶ್ವರ ದೇವಾಲಯದ ಲಿಂಗಗಳು ಕೂಡ ಪ್ರಾಕೃತಿಕ ಶಿಲಾಖಂಡಗಳಾಗಿವೆ ಅವುಗಳನ್ನು ಸ್ವಯಂಭೂಲಿಂಗಗಳೆಂದು ಕರೆಯಲಾಗುತ್ತದೆ. ಬಾರಕೂರು, ಕಂಬಾರು, ಚಾರ್ಮಾಡಿಯ ಪಂಚಲಿಂಗಗಳಲ್ಲಿ ದಕ್ಷಿಣದ ಲಿಂಗವು ದೊಡ್ಡದಾಗಿದ್ದು ಉತ್ತರಕ್ಕೆ ಸರಿದಂತೆ ಲಿಂಗಗಳು ಚಿಕ್ಕದಾಗಿದೆ. ಎಡ ತುದಿಯ ಲಿಂಗವು ಅತೀ ಚಿಕ್ಕದಾಗಿದೆ. ಪುತ್ತೂರಿನ ಪಂಚಲಿಂಗಗಳಲ್ಲಿ ಮಧ್ಯದ ಲಿಂಗವು ದೊಡ್ಡದಾಗಿದ್ದು ಅಕ್ಕಪಕ್ಕದ ಲಿಂಗಗಳು ಚಿಕ್ಕದಾಗಿವೆ. ಆದರೆ ಕಾಶಿ ಪಟ್ಟಣದ ಪಂಚಲಿಂಗಗಳನ್ನು ಪ್ರತಿಷ್ಠಾಪಿಸುವಾಗ ಅಂತಹ ಯಾವುದೇ ನಿಯಮಗಳನ್ನು ಅನುಸರಿಸಲಾಗಿಲ್ಲ. ಅಲ್ಲಿ ದಕ್ಷಿಣದ ಬದಿಯ ಲಿಂಗವು ದೊಡ್ಡದಾಗಿದ್ದು ನಂತರ ಎರಡು ಚಿಕ್ಕಲಿಂಗಗಳು ನಂತರ ಎರಡು ಮಧ್ಯಮ ಗಾತ್ರದ ಲಿಂಗಗಳಿವೆ. ಆದರೆ ಮಧ್ಯದ ಲಿಂಗವು ಅತೀ ಚಿಕ್ಕದಾಗಿದೆ.

ಪಂಚಲಿಂಗೇಶ್ವರ ದೇವಾಲಯಗಳ ಶಿವಲಿಂಗಗಳು ಪ್ರಾಕೃತಿಕವಾದ ಶಿಲಾ ಖಂಡಗಳಾಗಿದ್ದು ಅವುಗಳಿಗೆ ಶಿಲ್ಪಿಗಳು ಅಂತಿಮ ರೂಪ ನೀಡಿರುವುದಿಲ್ಲ. ಆದರೆ ಸಮಕಾಲೀನ ಶಿವಾಲಯಗಳಲ್ಲಿರುವ ಶಿವಲಿಂಗ ಸುಂದರವಾಗಿ ಕೆತ್ತಲ್ಪಟ್ಟಿವೆ. ಯಾವ ಕಾರಣಕ್ಕಾಗಿ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ಕಂಡು ಬರುವ ಶಿವಲಿಂಗಗಳು ಪ್ರಾಕೃತಿಕ ಶಿಲಾಖಂಡಗಳಾಗಿವೆ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಈ ಶಿವಲಿಂಗಗಳನ್ನು ಸ್ಥಾಪಿಸಿರುವ ಪೀಠಗಳಿಗೆ ಸುಂದವಾದ ರೂಪವನ್ನು ನೀಡಲಾಗಿದೆ. ತುಳುನಾಡಿನಲ್ಲಿ ಮಾತ್ರವಲ್ಲದೆ ಒರಿಸ್ಸಾದ ಪಂಚಲಿಂಗೇಶ್ವರ ದೇವಾಲಯದ ಶಿವಲಿಂಗಗಳನ್ನು ಸ್ವಯಂಭೂ ಎಂದು ಕರೆಯಲಾಗಿದ್ದು ಅವುಗಳು ಕೂಡ ನೈಸರ್ಗಿಕವಾದ ಶಿಲಾಖಂಡಗಳಾಗಿವೆ. ಈ ಪ್ರಶ್ನೆಗೆ ಉತ್ತರವೆಂಬಂತೆ ಬಾರಕೂರು ಪಂಚಲಿಂಗೇಶ್ವರ ದೇವಾಲಯಕ್ಕೆ ಸಂಬಂದಿಸಿದ ಐತಿಹ್ಯದಂತೆ ಮಾರ್ಕಾಂಡೇಯ ಮುನಿಗಳು ದೇವಾಲಯವನ್ನು ಪ್ರತಿಷ್ಠಾಪಿಸಿದ್ದು, ಶಿವಲಿಂಗಗಳನ್ನು ತರಲು ಕಾಶಿಗೆ ಜನರನ್ನು ಕಳುಹಿಸಲಾಗಿತ್ತು ಆದರೆ ಅವರು ಕಾಶಿಯಿಂದ ಹಿಂತಿರುಗಿ ಸಕಾಲದಲ್ಲಿ ಬಾರಕೂರನ್ನು ತಲುಪದ ಕಾರಣ ಸೀತಾನದಿಯ ಪರಿಸರದಲ್ಲಿ ನೈಸರ್ಗಿಕವಾಗಿ ದೊರೆತಂತಹ ಶಿಲಾ ಖಂಡಗಳನ್ನು ಆಯ್ಕೆಮಾಡಿ ಶಿವಲಿಂಗಗಳಾಗಿ ಪ್ರತಿಷ್ಠಾಪಿಸಲಾಯಿತು ಎಂದು ತಿಳಿಸುತ್ತದೆ. ಕಾಶಿಯಿಂದ ತಂದಂತಹ ಶಿವಲಿಂಗಗಳು ತಡವಾಗಿ ತಲುಪಿದ ಕಾರಣ ಆ ಪಂಚಲಿಂಗಗಳನ್ನು ಬಾರಕೂರಿನ ಪರಿಸರದಲ್ಲಿ ಪ್ರತಿಷ್ಠಾಪಿಸಲಾಗಿದೆಯಂದು ತಿಳಿದುಬರುತ್ತದೆ. ಉಳಿದ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ಯಾಕಾಗಿ

ನೈಸರ್ಗಿಕ ಶಿಲಾ ಖಂಡಗಳನ್ನೇ ಬಳಸಲಾಗಿದೆ ಎನ್ನುವ ಪ್ರಶ್ನೆ ಹಾಗೆಯೇ ಉಳಿದು ಕೊಳ್ಳುತ್ತದೆ. ತುಳುನಾಡಿನಲ್ಲಿ ಮಾತ್ರವಲ್ಲದೆ ಇತರೆಡೆಗಳಲ್ಲಿಯೂ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ನೈಸರ್ಗಿಕವಾದ ಶಿಲಾ ಖಂಡಗಳನ್ನೇ ಶಿವಲಿಂಗಗಳಾಗಿ ಪ್ರತಿಷ್ಠಾಪಿಸಿರುವುದು ಈಗಾಗಲೇ ಉಲ್ಲೇಖಿಸಲಾಗಿದೆ. ತುಳುನಾಡಿನ ಪಂಚಲಿಂಗೇಶ್ವರ ದೇವಾಲಯಗಳನ್ನು ಸ್ಥಳೀಯವಾಗಿ ದೊರೆತ ಶಿಲೆ ಹಾಗೂ ಮುರಕಲ್ಲಿನಿಂದ ನಿರ್ಮಿಸಲಾಗಿದೆ. ಈ ದೇವಾಲಯಗಳ ಪ್ರಮುಖ ಅಂಗಗಳೆಂದರೆ ಧ್ವಜಸ್ತಂಭ, ಪ್ರಧಾನ ಬಲಿಪೀಠ, ಮುಖ ಮಂಟಪ ಅಥವಾ ನಂದಿಮಂಟಪ, ನವರಂಗ ಸುಖನಾಸಿ, ಗರ್ಭಗೃಹ, ಗರ್ಭಗೃಹದಲ್ಲಿನ ಪಾಣಿಪೀಠ ಹಾಗೂ ಅದರಲ್ಲಿನ ಶಿವಲಿಂಗಗಳು, ಗರ್ಭಗೃಹ ಹಾಗೂ ನಂದಿ ಮಂಟಪಗಳ ಸುತ್ತಲಿನ ಪ್ರಾಕಾರ, ಪ್ರಧಾನ ಗುಡಿಯ ಸನಿಹದಲ್ಲೇ ಉಪಸ್ತಾನ ದೇವತೆಗಳ ಗುಡಿಗಳು, ಅದರ ಸನಿಹದಲ್ಲಿ ಶಿವನ ಗಣಗಳೆಂದು ಕರೆಯಲ್ಪಡುವ ತುಳುವರ ದೈವಗಳ ಗುಡಿಗಳು ಕಂಡುಬರುತ್ತವೆ. ಪ್ರಧಾನ ಗುಡಿಯ ಮಾಡು ಎರಡು ಅಥವಾ ಮೂರು ಹಂತಗಳಲ್ಲಿ ಮೇಲೇರಿರುವುದನ್ನು ಕಾಣಬಹುದಾಗಿದೆ. ದೇವಾಲಯದ ಮೇಲ್ಭಾಗದ ಛಾವಣಿಗೆ ಹಂಚಿನ ಅಥವಾ ತಾಮ್ರದ ಹೊದಿಕೆ ಹಾಕಿರುವುದು ಕಂಡುಬಂದರೆ ಕೆಳಮಾಡಿನ ಛಾವಣಿಯಲ್ಲಿ ಶಿಲಾ ಚಪ್ಪಡಿಗಳ ಹೊದಿಕೆಯನ್ನು ಕಾಣಬಹುದಾಗಿದೆ. ಪೋರ್ಚುಗೀಸರು ಈ ಪ್ರದೇಶಕ್ಕೆ ಆಗಮಿಸಿದ ನಂತರ ಕಾರ್ಖಾನೆಗಳಲ್ಲಿ ಹಂಚನ್ನು ತಾಯಾರಿಸಿದ ನಂತರ ದೇವಾಲಯಗಳಿಗೆ ಹಂಚಿನ ಹೊದಿಕೆಯನ್ನು ಹಾಕಲಾಯಿತು. ಅದಕ್ಕೂ ಮೊದಲು ಕೆಲವೆಡೆ ತಾಮ್ರದ ಹೊದಿಕಗಳಿದ್ದರೆ ಇನ್ನು ಕೆಲವೆಡೆ ಹುಲ್ಲಿನ ಹೊದೆಕೆಗಳಿದ್ದವೆಂದು ಗ್ರಹಿಸಬಹುದಾಗಿದೆ. ಹುಲ್ಲು ಅಥವಾ ಮುಳಿಹುಲ್ಲಿನ ಹೊದಿಕೆಯಿದ್ದ ದೇವಾಲಯಗಳಿಗೆ ಇತ್ತೀಚಿನ ವರ್ಷಗಳಲ್ಲಿ ಹಂಚು, ತಾಮ್ರ ಅಥವಾ ಶಿಲಾ ಹೊದಿಕೆಗಳನ್ನು ಹಾಕಿರುವುದನ್ನು ನಾವು ಕಾಣಬಹುದಾಗಿದೆ.

**ಉಪಸ್ಥಾನ ದೇವತೆಗಳು :**

ಪಶ್ಚಿಮ ಕರಾವಳಿಯ ಪಂಚಲಿಂಗೇಶ್ವರ ದೇವಾಲಯಗಳ ಪ್ರಾಕಾರದೊಳಗೆ ಹಲವಾರು ಉಪಸ್ಥಾನ ದೇವತೆಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ಕಂಡುಬರುವ ಉಪಸ್ಥಾನ ದೇವತೆಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದಾಗಿದೆ. ವೈದಿಕ ದೇವತೆಗಳು ಹಾಗೂ ತುಳುವರ ದೈವಗಳು. ಗಣಪತಿ, ಸುಬ್ರಮಣ್ಯ, ಶಾಸ್ತಾ, ದುರ್ಗೆ, ಸದಾಶಿವ, ಅನಂತಪದ್ಮನಾಭ, ಗೋಪಾಲಕೃಷ್ಣ, ಮಹಿಷಮರ್ದಿನಿ, ಕುಂತೇಶ್ವರ, ಸ್ಕಂದ, ಜನಾರ್ಧನ, ಸೂರ್ಯ, ಹನುಮಂತ ಮುಂತಾದ ವೈದಿಕ ದೇವತೆಗಳು ತುಳುನಾಡಿನ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ಆರಾಧಿಸಲ್ಪಡುತ್ತಿವೆ. ಮಹಿಷಂತಾಯ, ಬ್ರಹ್ಮಬೈದರ್ಕಳ, ಕೋಟಿಚನ್ನಯ್ಯ, ಉಳ್ಳಾಲ್ತಿ, ಮಹಾಲಿಂಗರಾಯ, ಕೊಡಮಂತಾಯ, ನಂದಿ, ಕಲ್ಲುರ್ಟಿ, ಪಂಜುರ್ಲಿ, ಮೂಜಿಲ್ಲಾಯ, ಬೈರವ ಮುಂತಾದ ತುಳುವರ ವೈದಿಕೇತರ ದೈವಗಳನ್ನೂ ಕೂಡ ಇಲ್ಲಿನ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ಆರಾಧಿಸಲಾಗುತ್ತದೆ. ಈ ರೀತಿಯಾಗಿ ತುಳುನಾಡಿನ ಪಂಚಲಿಂಗೇಶ್ವರ ದೇವಾಲಯಗಳಲ್ಲಿ ವೈದಿಕ ಪರಂಪರೆಯ ದೇವರುಗಳು ಹಾಗೂ ತುಳುವರ ದೈವಗಳನ್ನು ಒಂದೇ ದೇವಾಲಯದ ಸಂಕೀರ್ಣದೊಳಗೆ ತಂದು ಆರಾಧಿಸುವ ಕ್ರಮ ಬಹಳ ವಿಶಿಷ್ಟವಾಗಿದೆ. ಪಂಚಲಿಂಗೇಶ್ವರ ದೇವಾಲಯಗಳ ವಾರ್ಷಿಕ ಉತ್ಸವದ ಸಮಯದಲ್ಲಿ ಉಪಸ್ಥಾನ ದೇವತೆಗಳಿಗೆ ಮುಖ್ಯವಾಗಿ ತುಳುವರ ಆರಾಧನೆಯ ದೈವಗಳಿಗೆ, ನೇಮ, ಕೊಲ ಇತ್ಯಾದಿ ಸೇವೆಗಳನ್ನೂ ಸಲ್ಲಿಸಲಾಗುತ್ತದೆ. ಇದು ತುಳುನಾಡಿಗೆ ಬಂದಂತಹ ವೈದಿಕರು ಹಾಗೂ ಇಲ್ಲಿನ ತುಳುವರ ನಡುವಿನ ಧಾರ್ಮಿಕ ಸಾಂಸ್ಕೃತಿಕ ಸಂಬಂಧಗಳನ್ನು ಸೂಚಿಸುತ್ತದೆ. ತುಳುನಾಡಿನ ಶೈವ ದೇವಾಲಯಗಳು ವೈದಿಕರ ಶಿಕ್ಷಣ ಕೇಂದ್ರಗಳಾಗಿದ್ದವು. ಅವುಗಳಲ್ಲಿ ವೇದಾಧ್ಯಯನದಂತಹ ಶೈಕ್ಷಣಿಕ ಕಾರ್ಯಗಳು ನಡೆಯುತಿದ್ದವು. ಉಡುಪಿಯ ಅನಂತೇಶ್ವರ

ದೇವಾಲಯದಲ್ಲಿನ ಅನಂತಮಠದಲ್ಲಿ ಮಧ್ವಾಚಾರ್ಯರು ತಮ್ಮ ಶಿಕ್ಷಣವನ್ನು ಪಡೆದಿದ್ದರು. ಅನಂತಮಠವು ಶಿವಳ್ಳಿಯ ಸ್ಮಾರ್ಥ ಸಂಪ್ರದಾಯದವರ ಮಠವಾಗಿದ್ದು ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಕೇಂದ್ರವಾಗಿತ್ತು. ಅಲ್ಲದೆ ದ್ವೈತಮತ ಸ್ಥಾಪಕರಾದ ಶ್ರೀಮಧ್ವಾಚಾರ್ಯರು ಇಲ್ಲಿಯೇ ಅಧ್ಯಯನ ನಡೆಸಿದ್ದರು. ಒಟ್ಟಿನಲ್ಲಿ ತುಳುನಾಡಿನ ಪಂಚಲಿಂಗೇಶ್ವರ ದೇವಾಲಯಗಳು ಧಾರ್ಮಿಕ ಶೈಕ್ಷಣಿಕ, ಹಾಗೂ ಸಾಂಸ್ಕೃಕ ಕೇಂದ್ರಗಳಾಗಿ ತುಳುನಾಡಿನ ಮಾತ್ರವಲ್ಲದೆ ಈ ದೇಶದ ಧಾರ್ಮಿಕ ಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡಿವೆ.

**ಪರಾಮರ್ಶನ ಗ್ರಂಥಗಳು**


- ಮುರಳೀಧರ ಉಪಾಧ್ಯ ಹಿರಿಯಡ್ಕ, ಮತ್ತು ಪಿ. ಎನ್. ನರಸಿಂಹಮೂರ್ತಿ (ಸಂ.) (2000). *ದಕ್ಷಿಣ ಕನ್ನಡದ ದೇವಾಲಯಗಳು.* ಶ್ರೀ ಜನಾರ್ಧನ ಮತ್ತು ಮಹಾಕಾಳೀ ದೇವಸ್ಥಾನ.
- ಶೈಲಾ ಟಿ. ವರ್ಮ. (2009). *ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಜ್ಞಾನೋದಯ ಪ್ರಕಾಶನ.
- Gayatri, S. (2023, May 1). Aihole: Inside ancient India's first architectural lab. *Architectural Digest India*. https://www.architecturaldigest.in/story/aihole-inside-ancient-indias-first-architectural-lab/
- Gururaja Bhat, (2010). *History and Culture of South India.* Dr. Paduru Guruja Bhat Memorial Trust Publication.
- Hultzsch, E. (1890). *South-Indian inscriptions*. *Volume VII& IX, Part II, Volume XXVII.*
- *Panchalingeswar Temple - Tours Orissa*. (2016, November 25). Tours Orissa. https://www.toursorissa.com/temples-in-odisha/panchalingeswar-temple/
- Patil, A. (n.d.). *Aihole temples - Ancient India History Notes*. https://prepp.in/news/e-492-aihole-temples-ancient-india-history-notes
- Wikipedia contributors. (2021, December 10). *Panchalingeswar Temple*. Wikipedia. https://en.wikipedia.org/wiki/Panchalingeswar_Temple